ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**
ನೂರ ನಲವತ್ತೆರಡನೆಯ ಅಧಿವೇಶನ
ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಕೋವಿಡ್-19 ಪ್ರಯುಕ್ತ ಲಾಕ್‌ಡೌನ್‌ನಿಂದ ಸಂಕಷ್ಟದಲ್ಲಿರುವ ಕೈಮಗ್ಗ ನೇಕಾರರ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

437(569) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೋವಿಡ್-19ರ ಹಿನ್ನೆಲೆಯಲ್ಲಿ ಲಾಕ್‌ಡೌನ್ ವಿಧಿಸಿದ ಪ್ರಯುಕ್ತ ಸಂಕಷ್ಟದಲ್ಲಿರುವ ಕೈಮಗ್ಗ ನೇಕಾರಿಕೆ ಹಾಗೂ ಇತರೆ ಕೈಮಗ್ಗ ಚಟುವಟಿಕೆಗಳನ್ನು ನಡೆಸುವ ನೇಕಾರರಿಗೆ "ನೇಕಾರರ ಸಮ್ಮಾನ್" ಯೋಜನೆಯಡಿ ವಾರ್ಷಿಕ ರೂ.2,000/- ಹಣ ನೀಡುವುದಾಗಿ ಘೋಷಿಸಿದ್ದು, ಫಲಾನುಭವಿಗಳ ಖಾತೆಗೆ ಹಣ ಜಮೆ ಆಗಿದೆಯೇ;

(ಆ) ಬೆಳಗಾವಿ ಜಿಲ್ಲೆಯಲ್ಲಿ ಒಟ್ಟು ಇರುವ ಕೈಮಗ್ಗ ನೇಕಾರಿಕೆ ಹಾಗೂ ಇತರೆ ಕೈಮಗ್ಗ ಚಟುವಟಿಕೆಗಳನ್ನು ನಡೆಸುವ ನೇಕಾರರ ಸಂಖ್ಯೆ ಎಷ್ಟು;

(ಇ) ಪರಿಹಾರದ ಮೊತ್ತ ಇನ್ನೂ ತಲುಪಿಲ್ಲವೆಂಬ ಕೂಗು ಕೇಳಿಬರುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಇದನ್ನು ಪರಿಹರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು?